## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1562 |
| ಸದಸ್ಯರ ಹೆಸರು | : | ಶ್ರೀ ಬಿ. ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 24.09.2021 |
| ಉತ್ತರಿಸುವ ಸಚಿವರು | : | ಮುಖ್ಯ ಮಂತ್ರಿಗಳು |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| (ಅ) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿಗಾಗಿ ಪ್ರತ್ಯೇಕ ಸಚಿವಾಲಯ ಸ್ಥಾಪಿಸುವ ಉದ್ದೇಶ ಸರ್ಕಾರದ ಮುಂದಿದೆಯೇ; ಇದ್ದಲ್ಲಿ ಯಾವಾಗ ಪ್ರತ್ಯೇಕ ಸಚಿವಾಲಯ ಸ್ಥಾಪಿಸಲಾಗುವುದು; (ವಿವರ ನೀಡುವುದು) | ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ, ರವರು ದಿನಾಂಕ 17.09.2019ರಂದು ಕಲಬುರಗಿಯಲ್ಲಿ ಜರುಗಿದ "ಕಲ್ಯಾಣ ಕರ್ನಾಟಕ" ಉದ್ಘೋಷಣ ಕಾರ್ಯಕ್ರಮದಲ್ಲಿ ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಯನ್ನು ಸಚಿವಾಲಯವನ್ನಾಗಿ ಪರಿವರ್ತಿಸುವ ಕುರಿತು ಘೋಷಿಸಿರುತ್ತಾರೆ. ಅದರಂತೆ ಕಲ್ಯಾಣ ಕರ್ನಾಟಕ ಪ್ರದೇಶದ ಸರ್ವತೋಮುಖ ಅಭಿವೃದ್ಧಿಗಾಗಿ ಹಾಗೂ ಈ ಭಾಗದ ಅಭಿವೃದ್ಧಿ ಕಾರ್ಯಕ್ರಮಗಳನ್ನು ತ್ವರಿತವಾಗಿ ಅನುಷ್ಠಾನಗೊಳಿಸುವ ಮಹತ್ವಕಾಂಕ್ಷೆಯ ಕಾರ್ಯಕ್ರಮಗಳ ನಿರ್ವಹಣಾ ಜವಾಬ್ದಾರಿಯನ್ನು ಕಾರ್ಯದರ್ಶಿ, ಕಲ್ಯಾಣ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿ, ಕಲಬುರಗಿ ಇವರಿಗೆ ವಹಿಸಲು ಅನುಕೂಲವಾಗುವಂತೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 222 ಸಲುಸೇ 2019, ದಿನಾಂಕ 16.11.2019ರಲ್ಲಿ ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯ ಕಾರ್ಯದರ್ಶಿ, ಉಪ ಕಾರ್ಯದರ್ಶಿ ಹಾಗೂ ಅಧೀನ ಕಾರ್ಯದರ್ಶಿ ಮಟ್ಟದ ಅಧಿಕಾರಿಗಳನ್ನು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಉಪ ಕಾಯದರ್ಶಿ ಹಾಗೂ ಅಧೀನ ಕಾರ್ಯದರ್ಶಿ ಸ್ಥಾನಮಾನ ನೀಡಿ ಆದೇಶಿಸಲಾಗಿದ್ದು. ಇದರಿಂದ ಮಂಡಳಿಯ ಯೋಜನೆಗಳನ್ನು ಸ್ವತಂತ್ರವಾಗಿ ನಿರ್ವಹಿಸಲು ಹಾಗೂ ಸಚಿವಾಲಯ ಮಾದರಿಯಲ್ಲಿ ಆಡಳಿತಾತ್ಮಕ, ಹಣಕಾಸಿನ ಶಿಸ್ತುಕ್ರಮ ಮುಂತಾದ ಅಧಿಕಾರಗಳನ್ನು ಚಲಾಯಿಸಲು ಸಾಧ್ಯವಾಗಿರುತ್ತದೆ. |
| (ಆ) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ (ಕೆಕೆಆರ್‌ಡಿಬಿ) ಕಳೆದ 2 ವರ್ಷಗಳಲ್ಲಿ ಮೀಸಲಿಟ್ಟ ಅನುದಾನ ಎಷ್ಟು; ಬಿಡುಗಡೆಯಾದ ಅನುದಾನ ಎಷ್ಟು; ಖರ್ಚಾದ ಅನುದಾನ ಎಷ್ಟು? (ವಿವರ ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ (ಕೆಕೆಆರ್‌ಡಿಬಿ) ಕಳೆದ 2 ವರ್ಷಗಳಲ್ಲಿ ಮೀಸಲಿಟ್ಟ ಅನುದಾನ, ಬಿಡುಗಡೆಯಾದ ಅನುದಾನ, ಖರ್ಚಾದ ಅನುದಾನದ ವಿವರಗಳು ಈ ಕೆಳಗಿನಂತಿವೆ. (ರೂ. ಕೋಟಿಗಳಲ್ಲಿ) (see table below) |

(ರೂ. ಕೋಟಿಗಳಲ್ಲಿ)

| ಕ್ರ.ಸಂ. | ವರ್ಷ | ಮೀಸಲಿಟ್ಟ ಅನುದಾನ | ಬಿಡುಗಡೆಯಾದ ಅನುದಾನ | ವೆಚ್ಚ • |
|---|---|---|---|---|
| 1 | 2019-20 | 1500.00 | 1125.00 | 1246.81 |
| 2 | 2020-21 | 1131.86 | 1031.86 | 926.43 |

• ಭರಿಸಿದ ವೆಚ್ಚವು ಆರಂಭಿಕ ಶಿಲ್ಕನ್ನು ಒಳಗೊಂಡಿರುತ್ತದೆ.

(ಉತ್ತರವನ್ನು ಯೋಜನಾ ಇಲಾಖೆಯು ನೀಡಿರುವ ಮಾಹಿತಿಯಂತೆ ಸಿದ್ಧಪಡಿಸಲಾಗಿದೆ)

ಸಂಖ್ಯೆ: ಸಿಆಸುಇ 190 ಹೈಕಕೋ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ